


# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 18-03-2021 ಪ್ರಶ್ನೆ ಸಂಖ್ಯೆ : 1389(1594)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಎ. ತಿಪ್ಪೇಸ್ವಾಮಿ(ನಾಮನಿರ್ದೇಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 18-03-2021

ಉತ್ತರಿಸುವ ಸಚಿವರು: ಮಾನ್ಯ ಮುಖ್ಯಮಂತ್ರಿಗಳು

ವಿಷಯ : ಕೇಂದ್ರ ಸರ್ಕಾರದ ವಾಯು-ಸೌರಶಕ್ತಿಮಾನ್ ನೀತಿ (Wind-Solar Hybrid Policy)

(ಅ) ಕೇಂದ್ರ ಸರ್ಕಾರದ ನೂತನ ಮತ್ತು ನವೀಕರಿಸಬಹುದಾದ ಇಂಧನ ಮಂತ್ರಾಲಯ 2018ನೇ ಇಸವಿಯಲ್ಲಿ ಹೊರಡಿಸಿದ ವಾಯು-ಸೌರಶಕ್ತಿಮಾನ್ ನೀತಿ (Wind-Solar Hybrid Policy) ಯಂತೆ ಲಭ್ಯವಿರುವ ವಿದ್ಯುತ್ ಪ್ರಸರಣ ವ್ಯವಸ್ಥೆಯನ್ನು ಗರಿಷ್ಠವಾಗಿ ಬಳಸಿಕೊಳ್ಳಲು ನವೀಕರಿಸಬಹುದಾದ ವಿದ್ಯುಚ್ಛಕ್ತಿ ಉತ್ಪಾದನೆಯಲ್ಲಿ ಏರು-ಪೇರು ತಗ್ಗಿಸಲು ಮತ್ತು ಉತ್ತಮ ಗ್ರಿಡ್ ಸ್ಥಿರೀಕರಣ ಸಾಧಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳು ಯಾವುವು; (ಸಂಪೂರ್ಣ ಮಾಹಿತಿ ನೀಡುವುದು)

(ಆ) ಕೇಂದ್ರ ಸರ್ಕಾರ ಮಾರ್ಚ್, 2019ರಲ್ಲಿ ಹೊರಡಿಸಿರುವ ಸೂಚನೆಯಂತೆ 25 ಮೆಗಾವ್ಯಾಟ್‌ಗಳಿಗಿಂತ ಹೆಚ್ಚಾಗಿರುವ ಜಲ-ವಿದ್ಯುತ್ ಯೋಜನೆಗಳನ್ನು ನವೀಕರಿಸಬಹುದಾದ ಇಂಧನಗಳೆಂದು ಘೋಷಿಸಿರುವುದು ನಿಜವೇ; ಹಾಗಿದ್ದಲ್ಲಿ, ಈ ಯೋಜನೆ ಅಡಿಯಲ್ಲಿ ರಾಜ್ಯದಲ್ಲಿ ಎಷ್ಟು ಜಲ-ವಿದ್ಯುತ್ ಯೋಜನೆಗಳನ್ನು ಗುರುತಿಸಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು)

(ಇ) ವಾಯು-ಸೌರಶಕ್ತಿಮಾನ್ ವ್ಯವಸ್ಥೆಯನ್ನು ರೂಪಿಸಲು ಮತ್ತು ಜಲ-ವಿದ್ಯುತ್ ಯೋಜನೆಗಳನ್ನು ಉತ್ತೇಜನಗೊಳಿಸಲು ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ ಮತ್ತು ರಾಜ್ಯ ಸರ್ಕಾರದ ಅಧೀನದಲ್ಲಿರುವ ಪ್ರಸರಣ ಮತ್ತು ವಿತರಣ ಸಂಸ್ಥೆಗಳಿಗೆ ಅನುದಾನ ನೀಡಿದೆಯೇ ? (ಅನುದಾನ ಮತ್ತು ಅದರ ಬಳಕೆಯ ಪೂರ್ಣ ವಿವರ ನೀಡುವುದು)